# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

5ನೇ ವರ್ಷ 33ನೇ ಸಂಚಿಕೆ ಕೊಪ್ಪ 10-5-1987 ಭಾನುವಾರ ಬೆಲೆ 50 ಪೈಸೆ




## ಆದಿತ್ಯ ಫೈನಾನ್ಸ್ ಅನಿರ್ದಿಷ್ಟ ಬಂದ್:

# ಬಡವರ ಬೆವರ ಹಣಕ್ಕೂ ಧೋಖಾ?

**ಕೊಪ್ಪ : ರಾಷ್ಟ್ರಮಟ್ಟದ ನಾನ್- ಬ್ಯಾಂಕಿಂಗ್ ಹಣಕಾಸು ಸಂಸ್ಥೆಯೆಂದು ಅಬ್ಬರದ ಪ್ರಚಾರ ನಡೆಸಿ, ದೊಡ್ಡ ದೊಡ್ಡ ಮಳಿಗೆಗಳಲ್ಲಿ ಕಚೇರಿ ತೆರೆದಿದ್ದ "ಆದಿತ್ಯ ಫೈನಾನ್ಸ್" ಸಂಸ್ಥೆಯು ಇಲ್ಲಿನ ಹಾಗೂ ಸುತ್ತಮುತ್ತಲಿನ ಹಲವು ಊರುಗಳ ಶಾಖೆಗಳೂ ಅನಿರ್ದಿಷ್ಟವಾಗಿ ಬಾಗಿಲು ಮುಚ್ಚಿವೆ.**

ಕಳೆದ ತಿಂಗಳಿಡೀ ಚಿಕ್ಕಮಗಳೂರು, ಶಿವಮೊಗ್ಗ ಮತ್ತಿತರ ಅಕ್ಕಪಕ್ಕದ ಜಿಲ್ಲೆಗಳಲ್ಲಿನ ಈ ಸಂಸ್ಥೆಯ ಎಲ್ಲಾ ಶಾಖೆಗಳಲ್ಲೂ ಠೇವಣಿದಾರರು ಸಾಲ ಅಥವಾ ಠೇವಣಿಯ ಮರು ಪಾವತಿ ಬಯಸಿದಾಗ ಅದು ದೊರಕದೆ ಹೋದ ಕಾರಣಕ್ಕೆ ಎಲ್ಲಾ ಕಡೆ ಗಲಾಟೆಯಾಗಿದ್ದನ್ನು ಇಲ್ಲಿ ಸ್ಮರಿಸಬಹುದು.

ಅನಂತರ, ಸಂಸ್ಥೆಯ ಶಿವಮೊಗ್ಗ ವಲಯದ ಮ್ಯಾನೇಜರನು ಹಲವು ಲಕ್ಷ ರೂ.ಗಳನ್ನು ನುಂಗಿಹಾಕಿದ್ದಾಗಿಯೂ, ಆತನ ಮೇಲೆ ಕ್ರಮ ಕೈಗೊಂಡು ಬೇರೊಬ್ಬನನ್ನು ನೇಮಿಸಿರುವುದಾಗಿಯೂ ಠೇವಣಿದಾರರ ಹಣಕ್ಕೆ ಯಾವ ರೀತಿಯಲ್ಲೂ ಮೋಸವಿಲ್ಲವೆಂದೂ ಕಂಪೆನಿ ಹೇಳಿಕೆಯೊಂದನ್ನು ಹೊರಡಿಸಿತ್ತಾದರೂ ಎಲ್ಲೂ ಹಣ ಅಥವಾ ಸಾಲ ಪಾವತಿಗೆ ವ್ಯವಸ್ಥೆ ಮಾಡಿರಲಿಲ್ಲ.

ಇದೀಗ ಶಾಖೆಗಳ ಬಾಗಿಲ ಮೇಲೆ,

"ಅನಿವಾರ್ಯ ಕಾರಣಗಳಿಂದ ಬಾಗಿಲು ಮುಚ್ಚಲಾಗಿದೆ. ಪ್ರಧಾನ ಕಚೇರಿಯಿಂದ ಸಾಲದ ಹಣ ಬಂದ ಕೂಡಲೇ ತೆರೆಯಲಾಗುವುದು" ಎಂಬಂಥ ಬರಹಗಳನ್ನು ಅಂಟಿಸಲಾಗಿದೆ.

ಇದೇ ವೇಳೆಗೆ ಮೇ 7 ರಂದು ಚಿಕ್ಕಮಗಳೂರಿನಲ್ಲಿ ಸುಮಾರು 300 ಜನ ಕೂಲಿ ಕಾರ್ಮಿಕರು ಮತ್ತಿತರ ಮಹಿಳೆಯರಿದ್ದ ಸುಮಾರು 400 ಜನ ಠೇವಣಿದಾರರ ಗುಂಪು ಸಂಸ್ಥೆಯ ಅಲ್ಲಿನ ಕಚೇರಿಗೆ ಮುತ್ತಿಗೆ ಹಾಕಿ ಠೇವಣಿ ಹಣ ಕೂಡಲೇ ಹಿಂತಿರುಗಿಸಲು ಒತ್ತಾಯಿಸಿದ್ದಾಗಿ ವರದಿಯಾಗಿದೆ.

ಉಳ್ಳವರು ಆಸೆಗೋ, ದಾಕ್ಷಿಣ್ಯಕ್ಕೋ ಈ ಸಂಸ್ಥೆಗೆ ಠೇವಣಿ ನೀಡಿರುವುದು ಒಂದು ಬಗೆಯಾದರೆ, ಕಷ್ಟಪಟ್ಟು ಕಡಿಮೆ ಸಂಬಳಕ್ಕೆ ದುಡಿಯುವ, ಬೆವರು ಹರಿಸಿ ಅನಿಶ್ಚಿತ ಮೊತ್ತ ಗಳಿಸುವ ಹಲವು ಬಗೆ ಶ್ರಮಜೀವಿಗಳನ್ನು, ಕೂಲಿ-ಹಮಾಲಿ ಮತ್ತಿತರ ಎಲ್ಲ ಬಗೆಯ ಕಾರ್ಮಿಕರನ್ನು ಸಹ ಈ ಸಂಸ್ಥೆಯ 'ಏಜೆಂಟರು'ಗಳು ಪುಸಲಾಯಿಸಿ ಅವರಿಂದ ಸಂಸ್ಥೆಗೆ ಪಿಗ್ಮಿ ರೂಪದಲ್ಲೋ, ಯಾವ್ಯಾವ ರೂಪದಲ್ಲೋ ಹಣ ಸಂಗ್ರಹಿಸಿದ್ದರೆನ್ನಲಾಗಿದೆ.

ಆದರೆ ಈಗ ಅವರುಗಳು ತಮ್ಮ ಹಣಕ್ಕಾಗಿ ಈ ಏಜೆಂಟರನ್ನು ಕೇಳಿದರೆ ಬಾಗಿಲ ಮೇಲಿನ ಬರಹವನ್ನು ತೋರಿಸುತ್ತಿದ್ದು, ಈ ಬಡ ಬಗ್ಗರೆಲ್ಲ ತಲೆಯ ಮೇಲೆ ಕೈ ಹೊರುವಂತಾಗಿದೆ

ಈ ವರದಿ ಅಚ್ಚಿಗೆ ಹೋಗಲು ತಯಾರಾಗುತ್ತಿದ್ದಾಗಲೇ ಪತ್ರಿಕಾ ಕಚೇರಿಗೆ ರಾಘವೇಂದ್ರ ನಗರದ ಸದಾಶಿವ ಶೆಟ್ಟಿ ಎಂಬ ವೃದ್ಧರೊಬ್ಬರು ಇದೇ ಸಂಸ್ಥೆಯ ವಿರುದ್ಧ ದೂರು ತಂದರು

ಅವರು ಮನೆಯ ಬಳಿಯೇ ಸಣ್ಣ ಗೂಡಂಗಡಿಯೊಂದನ್ನು ಇಟ್ಟುಕೊಂಡಿದ್ದು, ಮನೆಯಲ್ಲಿ 3 ಜನ ಕೊಪ್ಪ ಎಸ್ಟೇಟಿಗೆ ಕೂಲಿಗೆ ಹೋಗುತ್ತಾರಂತೆ. 13 ವರ್ಷದ ಮಗ ಶಾಲೆಗೆ ಹೋಗುತ್ತ, ರಜೆಯಲ್ಲಿ ಬಸ್‌ಸ್ಟ್ಯಾಂಡಿನಲ್ಲಿ ಬಿಸ್ಕತ್ ಮಾರಿ ಕುಟುಂಬಕ್ಕೆ ನೆರವಾಗುತ್ತಾನಂತೆ.

ಆದಿತ್ಯ ಸಂಸ್ಥೆಯ ಬಿ. ಕೆ. ನಾಗರಾಜ ಗೌಡ ಎಂಬ ಏಜೆಂಟ್ ಈ ಕುಟುಂಬವನ್ನು ನಂಬಿಸಿ, ತಂದೆಯ ಹೆಸರಲ್ಲಿ ಒಂದು, ಹಾಗೂ ಇಬ್ಬರು ಹೆಣ್ಣು ಮಕ್ಕಳ ಹೆಸರಲ್ಲಿ ಮಗನಿಂದ ಎರಡು ಪಿಗ್ಮಿ ಖಾತೆಗಳನ್ನು ಮಾ. 86ರಲ್ಲಿ ತೆರೆಸಿದ್ದರಂತೆ. ಮೂರೂ ಖಾತೆಗಳಿಂದ ಒಟ್ಟು 1000 ರೂ. ಗೂ ಮಿಕ್ಕಿ ಹಣವಿದೆ ಎನ್ನುತ್ತಾರೆ ಶೆಟ್ಟರು.

ಮಗಳ ಮದುವೆ ನಿರ್ಧಾರವಾಗಿದ್ದು ಅದಕ್ಕಾದರೂ ಉಪಯೋಗವಾದೀತೆಂದು ಹಣ ಪಡೆಯಲು ಹೋದರೆ ಮುಚ್ಚಿದ ಬಾಗಿಲನ್ನೂ ಅದರ ಮೇಲೆ ಅಂಟಿಸಿರುವ ತಮ್ಮ 'ಹಣೇ ಬರಹ'ವನ್ನೂ ನೋಡಿ ಅವರು ಹೌಹಾರಿದ್ದಾರೆ.

ಯಾರೋ, 'ಕೋರ್ಟಿಗೆ ಹೋಗಿ' ಎಂದರೆ ಇನ್ಯಾರೋ ಪತ್ರಿಕಾ ಕಚೇರಿಗೆ ಹೋಗಲು ಸೂಚಿಸಿದರಂತೆ. "ಹೇಗಾದರೂ ದುಡ್ಡು ಬಂದೀತಾ ಸ್ವಾಮಿ?" ಎಂದು ಮುಗ್ಧರಾಗಿ, ಆಸೆ-ನಿರೀಕ್ಷೆಗಳಿಂದ ಕೇಳುತ್ತಾರೆ. ಕಷ್ಟದಿಂದ, ಮುಂದಿನ ನೆರವಿನ ಆಸೆಯಿಂದ ಸಂಗ್ರಹಿಸಿದ್ದ ಈ ಪುಟ್ಟ ಗಂಟು ಮುಳುಗಿ ಹೋದೀತೆಂಬ ಕಲ್ಪನೆಯನ್ನು ಸಹ ಮಾಡಲಾರದವರಾಗಿ ಕಾಣುತ್ತಾರೆ.

"ದುಡ್ಡು ಕಳಕೊಂಡ ನಾಲ್ಕೈದು ಜನರಾದರೂ ಒಟ್ಟಿಗೆ ಸೇರಿದರೆ ಕೋರ್ಟಿಗಾದರೂ ಹೋಗಬಹುದಿತ್ತೇನೋ" ಎಂದು ಅಂಥವರಿಗಾಗಿ ಈಗ ಹುಡುಕ ತೊಡಗಿದ್ದಾರೆ,

(4ನೇ ಪುಟಕ್ಕೆ)

## ಶೃಂಗೇರಿ - ಮದ್ರಾಸ್ ಮಧ್ಯೆ ಲಗ್ಸುರಿ ಬಸ್

ಶೃಂಗೇರಿ: ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಇಲ್ಲಿಂದ ಮದ್ರಾಸಿಗೆ ಸದ್ಯದಲ್ಲೇ ಲಗ್ಸುರಿ ಬಸ್ ಸಂಚಾರವನ್ನು ಆರಂಭಿಸಲಿರುವುದಾಗಿ ನಂಬಲರ್ಹವಾಗಿ ತಿಳಿದುಬಂದಿದೆ.

ಶೃಂಗೇರಿಯಿಂದ ಮಧ್ಯಾಹ್ನ 3 ಗಂಟೆಗೆ ಹೊರಡುವ ಈ ಬಸ್ಸು ಜಯಪುರ, ಚಿಕ್ಕಮಗಳೂರು, ಅರಸೀಕೆರೆ, ಬೆಂಗಳೂರು ಮಾರ್ಗವಾಗಿ ಮದ್ರಾಸಿಗೆ ಬೆಳಿಗ್ಗೆ 7 ಗಂಟೆಗೆ ತಲುಪುವುದೆನ್ನಲಾಗಿದೆ.

## ಅಕ್ರಮ ಮರ ಕಡಿತ:

ಕೊಪ್ಪ: ಇಲ್ಲಿಗೆ ಸಮೀಪದ ಅದ್ದಡ ಗ್ರಾಮದ ಸ. ನಂ 95ರ (ಘಾಟಿಯ ನೆತ್ತಿಯಲ್ಲಿ) ರೆವಿನ್ಯೂ ಜಾಗದಲ್ಲಿ ಅಕ್ರಮವಾಗಿ ಮರಗಳನ್ನು ಕಡಿದು ಜಮೀನು ಮಾಡಲು ಯತ್ನಿಸಿದ ವ್ಯಕ್ತಿಯೊಬ್ಬನ ವಿರುದ್ಧ ಅರಣ್ಯ ಇಲಾಖೆ ಕ್ರಮ ಕೈಗೊಂಡಿರುವುದಾಗಿ ವಲಯ ಅರಣ್ಯಾಧಿಕಾರಿ ಗೋಪಾಲ್ ಸಿಂಗ್ ತಿಳಿಸಿದ್ದಾರೆ.

ಈ ಬಗ್ಗೆ ಗ್ರಾಮಸ್ಥರು ಬರೆದಿದ್ದ ದೂರೊಂದನ್ನು 'ಮುಂಜಾವು' ಈ ಅಧಿಕಾರಿಯ ಗಮನಕ್ಕೆ ತಂದಿದ್ದಕ್ಕೆ ಉತ್ತರವಾಗಿ ಅವರು ಈ ವಿಚಾರ ತಿಳಿಸಿದ್ದಾರೆ.

ಸತ್ಯ ಘಟನೆ–
ಧರಿಸಿದ

# ಕಳೆದು ಹೋದವನು

● ಗುರುರಾಜ ತಂತ್ರಿ ಪಣಿಯೂರು

ಾವಿುಗೆ ಬೀಗ ಹಾಕಿ ಅವನು ಮೆಟ್ಟ
ು ಕೆಳಗೆ ಬಂದ. ವಾಚು ನೋಡಿದಾಗ
ತ್ತು ಗಂಟೆಯಾಗಿತ್ತು. ರಸ್ತೆಯಲ್ಲಿ
ನಗಳು ಗಿಜಿಗುಟ್ಟಿ ಸಾಗುತ್ತಿದ್ದವು.
ಕಾರ್ ಥಿಯೇಟರನ್ನು ಹಾದು ಮುಂ
ಂದು ರಥ ಬೀದಿಗೆ ಹೋಗುವ ಅಡ್ಡ
ಹಿಡಿದ. ದೂರದಲ್ಲಿ ಮಲ್ಲಿಕಾ ಹೋಟೆ
ತಾರಸಿ ಮಹಡಿಯಲ್ಲಿ ಬಣ್ಣದ ದೀಪ
ಝಗಿಸುತ್ತಿದ್ದವು. ಯಾರದೋ ಔತಣ
ಟವಿದ್ದಿರಬೇಕು. ಪಾಶ್ಚಾತ್ಯ ಸಂಗೀತ
ಬರುತ್ತಿತ್ತು. ಹಾಗೇ ಮುಂದೆ ಸಾಗಿ
ಅದಮಾರು ಮಠ ಛತ್ರದ ಬಳಿ ಬಂದಾ
ಥಬೀದಿಯಲ್ಲಿನ ಗದ್ದಲ ಅಸ್ಪಷ್ಟವಾಗಿ
ಸತೊಡಗಿತು. ರಸ್ತೆಯಲ್ಲಿ ಜನ ಗುಂ
ಮತ್ತು ಒಂಟಿಯಾಗಿ ಹೋಗುತ್ತಿದ್ದ
ಮತ್ತು ಬರುತ್ತಿದ್ದರು. ರಥ ಬೀದಿ ಸಮೀ
ತ್ತಿದ್ದಂತೆ ಗದ್ದಲ ಇನ್ನೂ ಜೋರಾಗಿ
ಸತೊಡಗಿತು. ಅವನ ದೇಹ ಉತ್ಸಾಹ
ದ ನಿಮಿರಿತು.
ವೇಗವಾಗಿ ಹೆಜ್ಜೆ ಹಾಕತೊಡಗಿದ. ನಿ
ರ ಗಟ್ಟಿಯಾಗತೊಡಗಿತು. ಆ ಗದ್ದಲ
ತಾನೂ ಸೇರಿ ಹೋಗಬೇಕು. ಹಗ
ೀ ವಿಲ ವಿಲನೆ ಒದ್ದಾಡಿ ದೇಹ ಹಿಂಡಿ
ಂಡಿದ್ದು ಸಾಕು. ಇನ್ನಿದಕ್ಕೆ ವಿದಾಯ
ಬೇಕು. ನೆನಪುಗಳನ್ನೆಲ್ಲ ಕಳಚಿ ಜನ
ದಣಿಯಲ್ಲಿ ಕರಗಿಸಿ ಗಾಳಿಯಲ್ಲಿ ಎತ್ತೆತ್ತ
ದೂರ ದೂರ ಅಟ್ಟಿಬಿಡಬೇಕು. ನಾನು
ೊಸದಾಗಬೇಕು. ಆ ಕ್ರಿಯೆ ಇಂದೇ
ಂಭವಾಗಬೇಕು.
ಉತ್ಸಾಹಿತನಾಗಿ ರಥಬೀದಿಗೆ ಬಂದಾಗ
ಗರದಂತೆ ಜನ ನೆರೆದಿದ್ದರು. ಕಿವಿ ಗಡ
ಕ್ಕುವಂತೆ ಗೌಜಿ ಏರುತ್ತಿತ್ತು. ಸಂದಣಿ
ಲ್ಲಿ ನುಗ್ಗಿಕೊಂಡು ಕೃಷ್ಣ ಮಠದೆದುರು
ರಬೇಕಾದರೆ ಅರ್ಧ ಗಂಟೆ ಕಳೆದಿತ್ತು.
ಗ ರಥ ಎಳೆಯಲು ಸನ್ನದ್ಧವಾಗಿತ್ತು.
ೂರದಲ್ಲೆಲ್ಲೋ ಗೆಳೆಯರ ಹಿಂಡು ಕಂಡಂ
ಯಿತು. ಅವರೆದುರು ಕಾಣಿಸಿಕೊಳ್ಳಲು
ಷ್ಟವಾಗಲಿಲ್ಲ. ಅವರೊಂದಿಗೆ ಸೇರಿ ಸೀರೆ
ಂಚು ಚೆನ್ನಟ್ಟಿ ಕಣ್ಣುಗಳೊಡನೆ ಕಣ್ಣು
ೂಡಿಸಿ ಒಳಗೊಳಗೇ ಹಿಗ್ಗುವ, ಎದ್ದೆ
ೂಂಟಗಳನ್ನು ಕತ್ತರಿಗಣ್ಣಿನಿಂದಳೆದು
ಪ್ಪರಿಸಿ ಏರಿ ಬಿಸಿಯಾಗುವ ಮನಸ್ಸು
ಂದಿರಲಿಲ್ಲ. ಅವರಿಗೆ ಕಾಣಿಸದಂತೆ ಮೆಲ್ಲ
ಜನರ ಗುಂಪಿನ ನಡುವೆ ಸೇರಿ ನಿಂತ.
ವನು ರಥದಿಂದ ಸುಮಾರು ಹಿಂದೆ ನಿಂತಿ
ರಥದ ಅರ್ಧದಿಂದ ಮೇಲ್ಭಾಗ ಅವನಿಗೆ
ಾಣಿಸುತ್ತಿದ್ದು ದೀಪಗಳಿಂದ ಹೊಳೆಯು
ತ್ತಿತ್ತು. ಸುತ್ತ ನೆರೆದವರೆಲ್ಲ ಗಜಿಬಿಜಿಸು
ತ್ತಿದ್ದರು. ಅವನಿಗೆ ತಾಗಿಯೇ ನಿಂತವರಾ
ೋ ಮಾತಾಡಿಕೊಳ್ಳುತ್ತಿದ್ದೆಡೆಗೆ ಅವನ
ವಿ ಅಪ್ರಯತ್ನಪೂರ್ವಕವಾಗಿ ಹರಿಯಿತು.
"ಹೌದಾ ಮಾರಾಯ್ರೇ, ನಿಮ್ಮ
ುಗಳು ಕುಂದಾಪುರಕ್ಕೆ ಕೊಟ್ಟವಳು
ತ್ತಿದ್ದಾಳೆಯೆ?" "ಹೌದಲ್ಲ. ಮೂರು ತಿಂ
ಳಾಯಿತು. ಹೆಣ್ಣು ಮಗು." "ಓ....
ನನಗೆ ಗೊತ್ತೇ ಇರಲಿಲ್ಲ ನೋಡಿ. ಹೆಸರೇ

ನಿಟ್ಟಿದ್ದೀರಿ?".... ರಿವ್ವನೆ ಒಳಗಿಂದೇನೋ ನುಗ್ಗಿ ಬಂತು. ಅವನಿಗೆ ಮುಂದಿನ ಮಾತು ಕೇಳಿಸಲಿಲ್ಲ. ಮನದಲ್ಲಿ ಕಲರವ ಪ್ರಾರಂಭವಾಯಿತು. ತಾನೆಲ್ಲೋ ಈ ಪ್ರಶ್ನೆ ಕೇಳಿದ್ದೆ. ಮಗು........ ಹೆಸರು........ ಹೆಸರೇನು?

................

....ಅಂದು ಸಾಯಂಕಾಲ ಕೃಷ್ಣ ಮಠದೊಳಕ್ಕೆ ಹೋಗುತ್ತಿರುವಂತೆಯೆ "ಮೋಹನ್" ಎಂಬ ಪರಿಚಿತ ಧ್ವನಿ ಕೇಳಿಸಿತು. ಹಿಂದೆ ತಿರುಗಿ ನೋಡಿದಾಗ ಎದೆ ಧಸ್ಸೆಂದಿತು. ಬಾರದ ನಗುವನ್ನು ಬರಿಸಿಕೊಂಡು ಬಳಿ ಹೋದ. "ಯಾವಾಗ ಬಂದದ್ದು?" ಎಂದು ಕೇಳಿದ. ಆದಷ್ಟು ಸಹಜವಾಗಿರಲು ಯತ್ನಿಸಿದ. ಆದರೆ ಆಕೆಯ ಕಣ್ಣುಗಳನ್ನು ಎದುರಿಸುವ ಸಾಹಸವಾಗಲಿಲ್ಲ. ಅವಳ ಕೈಯಲ್ಲಿ ಮುದ್ದಾದ ಮಗು ನಗುತ್ತಿತ್ತು. ಮಗುವಿನ ಕೆನ್ನೆ ಹಿಂಡಿದ. ಮಾತು ಮುಂದುವರಿಸುವುದಕ್ಕಾಗಿ "ಹೆಸರೇನು?" ಅಂದ.

"ಮುರಳಿ ಮೋಹನ್!" ಮೈ ಜುಮ್ಮೆಂದಿತು. ಆಕೆಯ ಮಾತುಗಳು ಧ್ವನಿಸುತ್ತಿದ್ದ ಮಾದಕತೆಯಿಂದ ತಲೆ ತಿರುಗತೊಡಗಿತು. ತಟ್ಟನೆ ಅವಳ ಕಣ್ಣುಗಳನ್ನು ದಿಟ್ಟಿಸಿದ.

ಅವೇ ಕಣ್ಣುಗಳು, ಅದೇ ಸೆಳೆತ, ಅವು

'ಹೋ' ಎಂದು ನುಗ್ಗುತ್ತ ಒಬ್ಬರನ್ನೊಬ್ಬರು ದೂಡಿ ಧಾವಂತ ಪಡುತ್ತಿದ್ದರು. ಮೆಟ್ಟುಗಳು, ಬರಿಪಾದಗಳು ಪರಪರನೆ ನೆಲವುಜ್ಜುತ್ತಿದ್ದವು. ಬಳೆಗಳ ಗಲಗಲ, ಹೂವಿನ ಪರಿಮಳ ಬೆವರಿನ ಕಮಟುನಾತ ಬಂದು ಬಡಿಯುತ್ತಿದ್ದವು. ಜನ 'ಗೋವಿಂದಾ' ಎಂದು ಬೊಬ್ಬೆ ಹೊಡೆಯುತ್ತಿದ್ದರು. ಇವನೂ ಶಕ್ತಿ ಮೀರಿ ಕೂಗಿದ.

ರಥ ಈಗ ಕಾಣಿಯೂರು ಮಠದೆದುರು ನಿಂತಿತು

ಪಕ್ಕನೆ ಒಂದು ಸಂದೇಹ ಹೆಡೆಯೆತ್ತಿತು. ಈ ಗುಂಪು, ಈ ಕೇಕೆ, ಇವುಗಳಲ್ಲಿ ನಾನು ಹೊಸದಾಗಬಲ್ಲೆನೆ? ಬೇಜವಾಬ್ದಾರಿಯುತ ಕ್ರಿಯೆಗಳ ನೆನಪುಗಳನ್ನು ಮರೆಯಲು ನಾನು ಈಗ ಮಾಡುತ್ತಿರುವ ಪ್ರಯತ್ನವೂ ನನ್ನಿಂದ ದೂರವಾಗಿಲ್ಲವೆ? ಅಂದು ನಾನು ಆಡಿದ ಮಾತು, ಗೈದ ಕ್ರಿಯೆಗಳು ನನ್ನವಾಗಿರಲಿಲ್ಲ. ಆದರ್ಶದ ಬುರುಡೆ ಬಿಟ್ಟು ಸೆಮಿನಾರುಗಳಲ್ಲಿ ಮುಷ್ಟಿ ಎತ್ತಿ ಗರ್ಜಿಸಿದ್ದೆಲ್ಲ ಸೋಗು. ಅದು ಮೊಗವಾಡದ ಬದುಕು.

ನಾನಾಗ ಗಾಳಿಯಲ್ಲಿ ಅಲೆಯುತ್ತಿದ್ದೆ. ನನ್ನ ವರ್ತನೆಗಳ ಬಗ್ಗೆ ಯೋಚಿಸಲು ಸಾಧ್ಯವೇ ಆಗದಷ್ಟು ತೀವ್ರವಾಗಿ ನಾನು ಹಾರುತ್ತಿದ್ದೆ. ಆ ಗುರಿಯಿಲ್ಲದ ಅಲೆತದಲ್ಲಿ

**ಈ ನೆನಪುಗಳನ್ನು ಸರಪಳಿ ಎಳೆದು ಬಂಧಿಸಬೇಕು. ರಥದ ತಿರುಗುವ ರಾಕ್ಷಸ ಚಕ್ರಗಳಡಿಯಲ್ಲಿ ಒಡ್ಡಿ ಅಪ್ಪಚ್ಚಿ ಮಾಡಬೇಕು. ಕುರುಹು ಕೂಡಾ ಉಳಿಯದಂತೆ ಜಜ್ಜಿ ಬಿಡಬೇಕು. ನಾನು ಹೊಸದಾಗಬೇಕು....**

ಗಳಲ್ಲೊಂದಿನಿತೂ ಬದಲಾವಣೆ ಇಲ್ಲ. ಅವನಿದನ್ನು ನಿರೀಕ್ಷಿಸಿರಲಿಲ್ಲ. ಹೊಟ್ಟೆಯ, ಪಕ್ಕೆಗಳಲ್ಲಿ ಫಳ್ ಎಂದು ವಿದ್ಯುತ್ ಸಂಚಾರ ಪ್ರಾರಂಭವಾಯಿತು. ಇನ್ನೂ ಅಲ್ಲಿ ನಿಂತು ತನ್ನನ್ನು ತಾನು ನಿಯಂತ್ರಿಸಿಕೊಳ್ಳಬಲ್ಲೆನೆಂಬ ಧೈರ್ಯ ಉಳಿಯಲಿಲ್ಲ. "ನಾನು ಬರಲಾ?" ಎಂದವನೇ ಉತ್ತರಕ್ಕೂ ಕಾಯದೆ ಮುಂದೆ ನಡೆದು ಬಿಟ್ಟ.

................

....ರಥ ಎಳೆಯಲು ಪ್ರಾರಂಭವಾಯಿತು. ನೆನಪುಗಳನ್ನು ತೊಡೆಯಲೆಂದಲ್ಲವೆ ತಾನಿಲ್ಲಿ ಬಂದುದು? ನನ್ನ ನಿರ್ಧಾರ ನನಗರಿವಿಲ್ಲದಂತೆಯೇ ಸಡಿಲವಾಗುತ್ತಿದೆಯೇಕೆ? ಇಲ್ಲ.... ಈ ನೆನಪುಗಳನ್ನು ಸರಪಳಿ ಎಳೆದು ಬಂಧಿಸಬೇಕು. ರಥದ ತಿರುಗುವ ರಾಕ್ಷಸ ಚಕ್ರಗಳಡಿಯಲ್ಲಿ ಒಡ್ಡಿ ಅಪ್ಪಚ್ಚಿ ಮಾಡಬೇಕು. ಕುರುಹು ಕೂಡಾ ಉಳಿಯದಂತೆ ಜಜ್ಜಿ ಬಿಡಬೇಕು. ನಾನು ಹೊಸದಾಗಬೇಕು. ಈ ಯೋಚನೆಗಳಿಂದ ಮೈ ಬೆಗಿತು. ಉತ್ಸಾಹದಿಂದ ಮುಂದೆ ಸಾಗಿದ. ಬ್ಯಾಂಡು ವಾದ್ಯಗಳು ಕರ್ಕಶವಾಗಿ ತಾರಕ ಸ್ಥಾಯಿಯಲ್ಲಿ ಎಡೆಬಿಡದೆ ಅರಚುತ್ತಿದ್ದವು. ರಥದ ಎದುರಲ್ಲಿ ಸೊಂಡಿಲಿನಿಂದ ಚಾಮರ ಬೀಸುತ್ತಾ ಹೋಗುತ್ತಿದ್ದ ಮಠದಾನೆಯ ಮೇಲ್ಭಾಗ ಮಾತ್ರ ಕಾಣಿಸುತ್ತಿತ್ತು ಜನ

ಪ್ರಜ್ಞೆಯೆಲ್ಲೋ ಹುಗಿದುಹೋಗಿತ್ತು, ಕಳೆದು ಹೋಗಿತ್ತು. ನಾನು ನೆಲ ಮುಟ್ಟಲೇ ಇಲ್ಲ. ನಾನು ಗಟ್ಟಿಯಾಗಲೇ ಇಲ್ಲ. ನನ್ನ ಮಾತುಗಳ ಜೀವರಾಹಿತ್ಯದಲ್ಲಿ ನಾನು ನನಗರಿವಿಲ್ಲದೆಯೇ ಕರಗುತ್ತಿದ್ದೆ. ನಾನು ಹೊಣೆಗಾರನಾದೆ, ಹೇಡಿಯಾದೆ....ಹೇಡಿ.... ಹೇಡಿ....! ಛೀ ನೆನಪುಗಳೇ ಹೊರಡಬೇಡಿ.. ಕುಣಿಯಬೇಡಿ....ಬೇಡಿ.... ಓ ಕಡಲು ಭೋರ್ಗರೆಯುತ್ತದೆ. ತೆರೆ ಉಕ್ಕುತ್ತದೆ. ಮಲ್ಪೆಯ ಸಮುದ್ರ ತೀರ....ಇಲ್ಲ ಇಲ್ಲ. ಪ್ರೇತ ನೃತ್ಯ ಆರಂಭವಾಗುವ ಮೊದಲೇ ಹಿಡಿಯಬೇಕು....ಹಿಡಿಯಬೇಕು. ಬೇ....

. ತೆರೆ ಭಿಲ್ಲೆಂದು ನೊರೆಕಾರಿ ಮೇಲೆ ನೆಗೆಯಿತು.

................

"ಮೋಹನ್....ನನ್ನ ಮದುವೆ ನಿಶ್ಚಯವಾಗಿದೆ."

"ಆಗಿ ಬಿಡಲ್ಲ !"

"ನೀವು ಹೇಡಿ ಮೋಹನ್ !" ಆಕೆ ಚೀರಿದ್ದಳು. "ನಾನು ಕೆಲವು ದಿನಗಳಿಂದ ನಿಮ್ಮನ್ನು ಗಮನಿಸುತ್ತಿದ್ದೇನೆ. ನೀವು ಪಲಾಯನ ಮಾಡಲು ಯತ್ನಿಸುತ್ತಿದ್ದೀರಿ. ನನ್ನ ದೇಹವೊಂದೇ ಬೇಕಾದುದು ನಿಮಗೆ."

"ಲೀನ, ನನ್ನ ಮಾತಿಷ್ಟು ಕೇಳು.... ನನ್ನನ್ನು ಅರ್ಥಮಾಡಿಕೋ.... ನನ್ನ ಸದ್ಯ

ದ ಸ್ಥಿತಿಯಲ್ಲಿ ನಾನೇನೂ ಮಾಡುವ ಹಾಗಿಲ್ಲ. ನಾನು ಪರ ಜಾತಿಯ ಹೆಣ್ಣನ್ನು ಮದುವೆಯಾದರೆ, ನನ್ನ ಸಹೋದರಿಯರ ಮದುವೆ ಆಗಬೇಡವೆ?" ತನ್ನ ಸ್ವರವಾಗ ಕೃತಕವಾಗಿದ್ದುದು ತನಗೇ ಎದ್ದು ಕಾಣುತ್ತಿತ್ತು.

"ಮೋಹನ್....ನೀವೀಗ ಸಂಪೂರ್ಣ ತೆರೆದುಕೊಂಡಿರಿ." ಆಕೆಯ ಧ್ವನಿ ಇರಿಯುತ್ತಿತ್ತು. "ನಿಮ್ಮ ಸೋಗಿನ ವ್ಯಕ್ತಿತ್ವವೆಂದೂ ನಿಮ್ಮದಾಗಲಿಲ್ಲ." ಮತ್ತೆ ಮೆದುವಾದಳು.

"ಈಗಲೂ ಹೇಳಿ....ನಾನು ಕಾಯಲೂ ಸಿದ್ಧಳಿದ್ದೇನೆ. ನನಗೊಂದು ನಂಬಿಕೆಯ ಮಾತು ಕೊಡಿ. ನಾನು ಮನೆಯವರನ್ನು ಎದುರಿಸುತ್ತೇನೆ."

ಅವನಾಗ ಸುಮ್ಮನಿದ್ದ. ಮನಸ್ಸು "ಇಲ್ಲಿಂದೆದ್ದು ಓಡು" ಎನ್ನುತ್ತಿತ್ತು.

"ಮೋಹನ್.... ನೀವು ನನ್ನನ್ನು ವಂಚಿಸಿದಿರಿ" ಆಕೆ ಏರು ಸ್ವರದಲ್ಲಿ ಚೀರಿ ರಭಸವಾಗಿ ಹೊರಟುಹೋದಳು.

................

ಹೊಟ್ಟೆ ಕಿವುಚಿದಂತಾಯಿತು. ಸುಮಾರು ಹೊತ್ತಿನಿಂದ ಮಾಯವಾಗಿದ್ದ ನೋವಿನ ಸೆಳಕು ಕಿಬ್ಬೊಟ್ಟೆಯಿಂದ ಮೇಲಕ್ಕೆ ಏರತೊಡಗಿತು ರಥ ಈಗ ಪುತ್ತಿಗೆ ಮಠದೆದುರು ಬಂದಿತ್ತು. ಗುಂಪು ಮತ್ತೂ ದಟ್ಟವಾಗತೊಡಗಿತು. ಅವನಿಗೆ ಅಸಾಧ್ಯ ಬಾಯಾರಿಕೆಯಾಗುತ್ತಿತ್ತು. ನಾಲಿಗೆ ಸಂಪೂರ್ಣ ಒಣಗಿ ಗಂಟಲು ಕೆರೆತ ತಾಳಲಾರದಷ್ಟು ತೀವ್ರವಾಯಿತು. ಆದರೆ ಸಂದಣಿಯಿಂದ ಹೊರ ಬರಲು ಅವನಿಗೆ ಸಾಧ್ಯವಾಗಲಿಲ್ಲ. ಅತ್ತಿತ್ತ ಸರಿಯಲೂ ಸಾಧ್ಯವಿರಲಿಲ್ಲ. ಹಿಂದಿನಿಂದ ಜನ ಒತ್ತರಿಸುತ್ತಿದ್ದರು ರಭಸಕ್ಕೆ ಅವನು ತೇಕುತ್ತಿದ್ದ. ಮುಂದೆ ತೇಲಿದ.

................

ಇಂದು ಬಂದ ಪತ್ರ ಓದಿ ಮುಗಿಸಿದಾಗ ಅವನ ಮನಸ್ಸು ಸ್ತಬ್ಧವಾಗಿತ್ತು. ಅಲ್ಲಿ ಗದ್ದಲವಿರಲಿಲ್ಲ. ಮೌನವೂ ಇರಲಿಲ್ಲ. ದೇಹಕ್ಕೆಲ್ಲ ಸೆಳವು ಬಂದಂತೆ ಸೆಟೆತು ಹೋಗಿತ್ತು. ಸಂತರ ಎದೆಯಾಳದಲ್ಲಿ ಅಸ್ಪಷ್ಟ ಕೊರೆತ ಪ್ರಾರಂಭವಾಯಿತು. ಅಸ್ಪಷ್ಟವಾಗಿದ್ದುದು ಸ್ಪಷ್ಟವಾಗುತ್ತಾ ಕೊರೆತ ಬೇನೆಯಾಗಿ ದೇಹವಿಡೀ ವ್ಯಾಪಿಸಿಕೊಂಡಿತು. ಎಲ್ಲೆಡೆಯಿಂದ ಛರ್ಚಿಗಳು ಉರವಣಿಸಿ ಬಂದು ಕುಕ್ಕುತ್ತಿದ್ದವು, ಇರಿಯುತ್ತಿದ್ದವು ಬೆಂಕಿಗೆ ಬಿದ್ದ ಹುಳುವಿನಂತೆ ತುಳ್ಳಾಡಿದ್ದ. ಆ ಪತ್ರವನ್ನು ಹರಿದು ಕಡ್ಡಿಗೀರಿ ಬೂದಿಮಾಡಿದ್ದ, ಆದರೆ ಮನದಲ್ಲಿ ಅಚ್ಚೊತ್ತಿದ್ದ ಮಾತುಗಳು ಹಾರಿಹಾರಿ ಬಡಿಯುತ್ತಿದ್ದವು.

'ಮನಸ್ಸು ಒತ್ತಾಯಪಡಿಸಿದ್ದರಿಂದ, ಬದುಕಿನ ಕೊನೆಯ ನಿರ್ಣಯಕ್ಕೆ ಬಂದ ನಾನು. ಈ ಪತ್ರವನ್ನು ನಿಮಗೆ ಬರೆಯುತ್ತಿದ್ದೇನೆ. ನನ್ನ ಸಾವು ಅನಾಥವಾದುದಲ್ಲ ಎಂಬುವನ್ನು ಈ ಪತ್ರದಲ್ಲಿ ಕಕ್ಕಿಕೊಂಡಷ್ಟಾದರೂ ಹೊರಗೆಡಹಿದ ತೃಪ್ತಿ ನನಗಿದೆ.'....

ಮೈ ಕುದಿಯುತ್ತಿತ್ತು. ಸೆಖೆ ತಡೆಯಲಾಗುತ್ತಿರಲಿಲ್ಲ. ಸಂದಣಿಯಲ್ಲಿ ಒತ್ತಡ ಕ್ಷಣ ಕ್ಷಣಕ್ಕೂ ಏರುತ್ತಿತ್ತು. ಗಂಟಲ ನರ ಉಬ್ಬಿ ಉಬ್ಬಿ ಸಿಡಿಯತೊಡಗಿತು. ಅಂಗಿಯ ಗುಂಡಿ ಜಗ್ಗಿ ಉಫ್ ಎಂದು ಗಾಳಿ ಊದಲಾರಂಭಿಸಿದ. (3ನೇ ಪುಟಕ್ಕೆ)

## ಓದುಗರ ಪತ್ರಗಳು

### ವಿದ್ಯಾರ್ಥಿ ಮತ್ತು ಸಂಚಾಯಿಕ

ಮಾನ್ಯರೆ,

ಶಾಲೆಗಳಲ್ಲಿ ಮಕ್ಕಳು ತಮ್ಮ ಪೋಷಕರಿಂದ ಕೇಳಿ ತಂದು ಖರ್ಚು ಮಾಡುವ ಹಣದಲ್ಲಿ ಅಲ್ಪ ಸ್ವಲ್ಪ ಉಳಿಸಲು ಕಲಿಸುವ ಮೂಲಕ ಚಿಕ್ಕಂದಿನಿಂದಲೇ ಉಳಿತಾಯದ ಮನೋಭಾವ ಬೆಳೆಸುವ ಸದುದ್ದೇಶದಿಂದ ಆರಂಭಗೊಂಡಿದ್ದ "ವಿದ್ಯಾರ್ಥಿ ಸಂಚಾಯಿಕ" ಯೋಜನೆ ಇಂದು ಯಾವ ಸ್ಥಿತಿಗೆ ಮುಟ್ಟಿದೆಯೆಂಬ ಬಗ್ಗೆ ಸಂಬಂಧಪಟ್ಟವರೆಲ್ಲರೂ ಯೋಚಿಸಬೇಕಾಗಿದೆ.

ಉಳಿತಾಯ ಕಲಿಸುವ ಜೊತೆಗೆ, ಆ ಹಣಕ್ಕೆ ಜವಾಬ್ದಾರಿಯುತವಾಗಿ ಪಾಸ್‌ಬುಕ್, ಚೆಕ್ ಬುಕ್ ಮುಂತಾದುವುಗಳನ್ನು ನೀಡಿ ಬ್ಯಾಂಕಿನ ಮೂಲ ವ್ಯವಹಾರಗಳನ್ನು ಕಲಿಸುವುದು ಸಹ ಈ ಯೋಜನೆಯ ಗುರಿಯಾಗಿತ್ತು. ಅಂತೆಯೇ, ಆಯಾ ವರ್ಷದಲ್ಲಿ ಅತಿ ಹೆಚ್ಚು ಹಣ ಕೂಡಿಸಿದ ಶಾಲೆಗೂ, ವಿದ್ಯಾರ್ಥಿಗೂ ಪ್ರೋತ್ಸಾಹ ಬಹುಮಾನ ನೀಡುವುದೂ ಯೋಜನೆಯಲ್ಲಿ ಸೇರಿತ್ತು.

ಆದರೆ ಕಾಲಕ್ರಮೇಣ ಈ ಯೋಜನೆಯಿಂದಾಗಿ ವಿದ್ಯಾಸಂಸ್ಥೆಗಳು 'ಆರ್ಥಿಕ ಸಂಸ್ಥೆ'ಗಳಾಗಿ ಮಾರ್ಪಾಡಾಗುತ್ತವೆ ಎಂಬ ಪರಿಕಲ್ಪನೆ ಸರ್ಕಾರಕ್ಕೆ ಬಹುಶಃ ಇದ್ದಿರಲಿಕ್ಕಿಲ್ಲ. ಚೆನ್ನಾಗಿ ಓದಿ ಬರೆದು, ಹೆಚ್ಚಿನ ಅಂಕ ಪಡೆದು ಪಾಸಾಗಬೇಕೆಂದು ಹಟ ಹೊರಬೇಕಾದ ಅದೆಷ್ಟೋ ಮಕ್ಕಳು ಇಂದಿನ ದಿನಗಳಲ್ಲಿ ಹಣ ತೊಡಗಿಸುವ ಬಗೆಗೇ ತಮ್ಮ ಸಮಯ-ಹಾಗೂ ಶ್ರಮವನ್ನು ವಿನಿಯೋಗಿಸುತ್ತಿರುವುದು ಕಂಡು ಬರುತ್ತಿದೆ.

ಮಾಧ್ಯಮಿಕ ಶಾಲೆಗಳಲ್ಲಂತೂ, ಪ್ರತಿಯೊಬ್ಬ ವಿದ್ಯಾರ್ಥಿಯ ಕೈಯಲ್ಲೂ ಒಂದೊಂದು ಪಾಸ್ ಬುಕ್. ಅದರಲ್ಲಿ ತಾನು ತೊಡಗಿಸಿರುವ ಹಣದ ಮೊತ್ತವನ್ನು ಬೇರೆಯವರಿಗೆ ತೋರಿಸಿ ಹೆಮ್ಮೆಪಟ್ಟುಕೊಳ್ಳುವುದರಲ್ಲಿಯೇ ಆತನಿಗೆ ಸಂತೋಷ ಹಾಗೂ ತೃಪ್ತಿ. ತನ್ನ ಸ್ನೇಹಿತನೊಬ್ಬನು ತನಗಿಂತ ಹೆಚ್ಚಿನ ಹಣ ತೊಡಗಿಸಿದ್ದಾನೆಂತಾದರೆ ಪೈಪೋಟಿ ಪ್ರಾರಂಭ.

**ದುಡಿದು ಗಳಿಸಲು ಅಸಹಾಯಕರಾಗಿರುವ** ಈ ಮಕ್ಕಳಿಗೆ ಅವರ ತಂದೆತಾಯಿ ಅಥವಾ ಪೋಷಕರೇ ಹಣ ಕೊಡಬೇಕು. ಆದರೆ ಅವರು ನೀಡುವ ಹಣದಿಂದಲೇ ಬಹುಮಾನ ಗೆಲ್ಲುವ ಸಾಧ್ಯತೆಯಿಲ್ಲವೆಂದು ಪ್ರತಿಯೊಬ್ಬ ವಿದ್ಯಾರ್ಥಿಗೂ ತಿಳಿದಿದೆ. ಆದ್ದರಿಂದ ಎಷ್ಟೋ ವಿದ್ಯಾರ್ಥಿಗಳು ಹಣ ಸಂಪಾದಿಸುವ 'ಮಾರ್ಗ'ವನ್ನೂ ಕಂಡುಕೊಂಡಿದ್ದಾರೆ —ಬೆಳಿಗ್ಗೆ ಶಾಲೆ ಪ್ರಾರಂಭವಾಗುವ ಮುಂಚೆ ಹಾಗೂ ಸಾಯಂಕಾಲ ಶಾಲೆ ಬಿಟ್ಟ ನಂತರ ಸಗಣಿ ಆರಿಸುವುದು, ಭತ್ತದ ತುಂಡು ತೆನೆ ಆರಿಸುವುದು, ಉದಿರು ಅಡಿಕೆ ಆರಿಸುವುದು ಇತ್ಯಾದಿ. ಇನ್ನು ಅವರಿಗೆ ಓದಲು, ಬರೆಯಲು ಸಮಯವೆಲ್ಲಿದೆ ?

ಇಷ್ಟೇ ಅಲ್ಲದೆ, ಅನೇಕ ವಿದ್ಯಾರ್ಥಿಗಳು ತಮ್ಮ ಅಪ್ಪನ ಹಣದ ಪೆಟ್ಟಿಗೆಗೇ ಕನ್ನ ಹಾಕುವ ಕೆಲಸವನ್ನು ಸಹ ಮಾಡುತ್ತಿದ್ದಾರೆಂದು ಹಲವಾರು ಪೋಷಕರ ದೂರು. ಮನೆಯಲ್ಲಿಟ್ಟಿದ್ದ ಭತ್ತವನ್ನೋ, ಅಡಿಕೆಯನ್ನೋ ಕದ್ದು ಮಾರುವ ಮೂಲಕವೂ ಕೆಲ ಮಕ್ಕಳು 'ಖಾತೆ'ಗಾಗಿ ಹಣ ದೊರಕಿಸ ತೊಡಗಿದ್ದಾರಂತೆ.

ಇದೇ 'ವ್ಯವಹಾರ'ದಲ್ಲಿ ಮುಳುಗಿರುವ ಎಷ್ಟೋ ವಿದ್ಯಾರ್ಥಿಗಳು ತಮ್ಮ ಓದಿನ ಬಗೆಗಾಗಲಿ, ಆಟೋಟಗಳ ಬಗೆಗಾಗಲಿ ಎಷ್ಟೂ ಚಿಂತಿಸಲಾರರು.

ಹೀಗೆ 'ಹಣವೇ ಸರ್ವಸ್ವ' ಎಂಬ ಮನೋಭಾವನೆ ಈ ಅರಿಯದ ಮಕ್ಕಳ ತಿ ಮನಸ್ಸಿನಲ್ಲಿ ಬೇರೂರಿದರೆ ನಾಳೆಯ ನಾಡಿನ ಭವಿಷ್ಯ ಏನಾಗಬಹುದು ?

—ಶಿವರಾಮ ಭಂಡಾರಿ
ಭಂಡಿಗಡಿ

### ನತದೃಷ್ಟ ಟಿ. ವಿ.

ಮಾನ್ಯರೆ,

ಕೊಪ್ಪದ ಸಾರ್ವಜನಿಕರಿಗೆ ಮನರಂಜನೆಗಾಗಿ ಪುರಸಭೆಯವರು ಟಿ. ವಿ. ಯನ್ನು ಸ್ಥಾಪಿಸಿದ್ದು ಸರಿಯಷ್ಟೆ. ಆದರೆ ಅ [illegible] ತಿಂಗಳೊಳಗೇ ಅದು ಕೆಟ್ಟಿದೆ. ಈಗ 20 ದಿನದ ಮೇಲಾಯಿತು ಇನ್ನೂ ರಿಪೇರಿ ಆಗಿಲ್ಲ.

ಪುರಸಭೆಯವರು ಇನ್ನಾದರೂ ಇತ್ತ ಗಮನಹರಿಸಿ ವ್ಯವಸ್ಥಿತವಾಗಿ ಟಿ. ವಿ. ನಡೆಸುವ ಏರ್ಪಾಡು ಮಾಡುವರೆ ?

—ನೊಂದವರು, ಕೊಪ್ಪ
(6 ಸಹಿಗಳಿವೆ.

# ಕಳೆದು ಹೋದವನು

(2ನೇ ಪುಟದಿಂದ)

'............ನಾನು ನಿಮ್ಮನ್ನು ದ್ವೇಷಿಸಲು ಪ್ರಯತ್ನಿಸಿದೆ ಮೋಹನ್.... ನಿಮ್ಮ ನೆನಪಿನ ತುಣುಕುಗಳನ್ನು ದಹಿಸಲು ಯತ್ನಿಸಿದೆ. ಆದರೆ ನಾನು ವಿಫಲಳಾದೆ. ನನಗೆ ಮತ್ತೂ ಆಸೆ ನಿಂಚುತ್ತಿತ್ತು. ಸಾಧುವೋ ಅಸಾಧುವೋ ನನ್ನೆದೆಯಾಳದ ಆಸೆಯದು. ಆದರೆ ನಾನು ಕೇವಲ ಭ್ರಮಿಸಿದ್ದೆ. ಆ ಭ್ರಮೆಯ ನಿರಸನ ನೀವಂದು ರಥ ಬೀದಿಯಲ್ಲಿ ಕೃಷ್ಣ ಮಠದ ಬಳಿ ಸಿಕ್ಕಿದಾಗಲೇ ಆಯಿತು. ನಿಮ್ಮ ಅಂದಿನ ನೋಟದಲ್ಲಿ ನಾನು ಕಂಡದ್ದು ಹಸಿವೆ ಮತ್ತು ಹೇಡಿತನ...........'

ರಥದಲ್ಲಿ ಬಲ್ಬುಗಳು ಹೊಳೆಯುತ್ತಿದ್ದವು. ಆದರೆ ಗುಂಪಿನ ನಡುವೆ ಬೆಳಕನ್ನು ಕತ್ತಲೆ ನುಂಗಿತ್ತು.

'............ನನ್ನ ಪತಿ ತುಂಬ ಒಳ್ಳೆಯವರು. ನಾನೊಂದಿಷ್ಟು ಖಾಯಿಲೆ ಬಿದ್ದರೂ ಕಳಕಳಿಯಿಂದ ವಿಚಾರಿಸುತ್ತಾರೆ. ಉಪಚರಿಸುತ್ತಾರೆ. ನನ್ನ ಮನಸ್ಸಿಗೊಂದಿನಿತೂ ನೋವು ಮಾಡುವುದಿಲ್ಲ. ಆದರೆ ಅವರು ನಿಜವಾಗಿ ನನಗೆ ಏನಾಗಬೇಕಿತ್ತೋ ಹಾಗೆ ಕಾಣಿಸುವುದೇ ಇಲ್ಲ. ಅವರು ತಂದೆಯಾಗುತ್ತಾರೆ, ಗೆಳೆಯನಾಗುತ್ತಾರೆ, ಹಿತೈಷಿಯಾಗುತ್ತಾರೆ, ಅಷ್ಟೆ'... ....

ಜನ ಗೋವಿಂದ ಹಾಕುತ್ತಿದ್ದರು. ಏನಾದರಾಗಲೀ ಗಂಟಲು ಬಿರಿದು ಹರಿದು ಹೋಗುವಂತೆ ಕಿರುಚಬೇಕೆಂದು ಕೊಂಡ. ಆದರೆ ಸ್ವರ ಹುದುಗಿ ಹೋಗಿತ್ತು.

'....ನಿಮ್ಮನ್ನು ಪ್ರೈಯಬಲ್ಲೆ ಮೋಹನ್. ಆದರೆ ದ್ವೇಷಿಸಲಾರೆ. ಈ ಇಬ್ಬಗೆಯ ತಾಕಲಾಟವನ್ನು ತಾಳಲಾರೆ. ಈ ದ್ವಂದ್ವ ನನ್ನ ಬದುಕಿನಲ್ಲಿ ನನಗೊಂದು ಶಾಪವಾಗಿ ಬಂದಿದೆ. ನಾನು ನನ್ನ ಪತಿಗೆ ಅಪ್ರಾಮಾಣಿಕಳಾಗಿ ನನ್ನನ್ನೇ ವಂಚಿಸಿಕೊಳ್ಳಲಾರೆ. ನನ್ನ ಈಗಿನ ಒಂದೊಂದು ಕೃತಿಯೂ ನನ್ನನ್ನು ಹಂಗಿಸುತ್ತಿದೆ. ವಿಚ್ಛೇದ ತೆಗೆದುಕೊಳ್ಳುವುದರ ಅರ್ಥ ನನಗಾಗುತ್ತಿಲ್ಲ. ನನಗೀಗ ಅರ್ಥಪೂರ್ಣವಾದ ಒಂದೇ ಒಂದು ದಾರಿಯೆಂದರೆ ಬದುಕನ್ನು ಮುಚ್ಚಿ ಬಿಡುವುದು. ನನ್ನ ಮಗುವೊಂದಿದೆ. ಆದರೆ ಅದು ನಾನಿಲ್ಲದೆಯೂ ಬೆಳೆಯಬಲ್ಲದು. ನನಗಿಂತಲೂ ತನ್ನ ತಂದೆಯನ್ನೇ ಹಚ್ಚಿಕೊಂಡಿದೆಯದು. ಇದನ್ನು ಓದಿ ಸೆಂಟಿಮೆಂಟಲ್ ಎಂದು ನೀವು ನಕ್ಕು ಬಿಡಬಹುದು. ಆದರೆ ಭಾವನೆಗಳಿಗೆ ನೀವೂ ಒಂದು ದಿನ ಬೆಲೆ ಕೊಡಬೇಕಾಗುತ್ತದೆ ಮೋಹನ್'............

"ಕಳ್ಳ....ಕಳ್ಳ....ಹಿಡಿಯಿರಿ...." ಯಾರೋ ಗುಂಪಿನೊಳಗಿಂದ ಕೂಗಿದರು. ಗುಂಪು ಸ್ವಲ್ಪ ಅತ್ತಿತ್ತ ಚದುರಿತು. ನಾಲ್ಕಾರು ಜನ ಓಡುತ್ತಿದ್ದ ಕಳ್ಳನನ್ನು ಹಿಡಿದು ಗುದ್ದಿದರು. "ಮಗುವಿನ ಸರ ಕಡಿಯಲು ನಾಚಿಕೆಯಾಗುವುದಿಲ್ಲವೇ ನಿನಗೆ ?" ಯಾರೋ ತುಪ್ಪಿದರು. "ಈ ಬೇವಾರ್ಸಿಗಳು ಇದಕ್ಕೆಂತಲೇ ಗುಂಪಿನಲ್ಲಿ ಸೇರಿಕೊಂಡು ಬಿಡುತ್ತವೆ. ನೋಡುವುದಕ್ಕೆ ಟಿಪ್ ಟಾಪಾಗಿ ಹೇಗಿರುತ್ತಾರೆ ಅಂತೀರಿ ? ಮಾಡುವುದೆಲ್ಲ ಇಂಥದ್ದೇ ಕೆಲಸ" ಅವನ ಮನಸ್ಸಿನಲ್ಲಿ ಏನೋ ಕುಟುಕಿತು. ಒಬ್ಬ ಪೋಲಿಸ್ ನುಗ್ಗಿ ದಾರಿಮಾಡಿಕೊಂಡು ಬಂದು ಕಳ್ಳನ ಕಾಲರ್ ಹಿಡಿದು ದೂಡುತ್ತಾ ಹೋದ

ರಥ ಈಗ ದಕ್ಷಿಣದ ಬದಿಯಲ್ಲ ನಿಂತಿತ್ತು. ಬ್ಯಾಂಡುಗಳ ಸದ್ದೀಗ ನಿಂತಿತ್ತು. ಬಾಣಬಿರುಸುಗಳನ್ನು ಸುಡುತ್ತಿದ್ದರು. ಸುರ್ರ ಸುರ್ರನೆ ಬತ್ತಿಗಳು ಹಾರಿದವು. ಆಕಾಶ ಬಾಣದಿಂದ ವಿಚಿತ್ರ ಬಣ್ಣದ ಕಿಡಿಗಳು ತೇಲಿದವು. ಪಟಾಕಿಗಳು ಸಿಡಿದವು.

ಫಕ್ಕನೆ ಗುಂಪೆಲ್ಲ ಅಲ್ಲೋಲ ಕಲ್ಲೋಲವಾಯಿತು. ಜನ ಸಿಕ್ಕಿದಲ್ಲಿ ಓಡತೊಡಗಿದರು. ಏನು ಏನು ಅನ್ನುವಷ್ಟರಲ್ಲೇ ದೂರದಲ್ಲಿ ಸೊಂಡಿಲೆತ್ತಿ ದೌಡಾಯಿಸುತ್ತಿದ್ದ ಆನೆಯ ಘೀಳಿನ ಧ್ವನಿ ಕೇಳಿಸಿತು. ಕೆಲವು ಜನ ಕೈಯಲ್ಲಿದ್ದ ಹಣ್ಣುಕಾಯಿ ಹರಿವಾಣಗಳನ್ನೇ ಆನೆಯ ಮೇಲೆ ಒಗೆದರು. ಆನೆ ಇನ್ನೂ ಹುಚ್ಚೆದ್ದು ಅಡ್ಡಾದಿಡ್ಡಿ ಓಡತೊಡಗಿತು. ಜನರೆಲ್ಲ ಒಬ್ಬರ ಮೇಲೊಬ್ಬರು ಬಿದ್ದು ಓಡತೊಡಗಿದರು. ರಸ್ತೆಬದಿಯ ಹಣ್ಣು, ಬಳೆ, ಗೂಡಂಗಡಿಗಳು ಪುಡಿಯಾದವು. ಜನರು ಎಡೆ ಸಿಕ್ಕಿದಲ್ಲಿ ಅಡಗಿಕೊಂಡರು. ಆನೆ ತೆಂಕುಪೇಟೆಯಲ್ಲಿ ನುಗ್ಗಿ ಓಡಿ ಹೋಯಿತು.

ಇವನು ರಥದ ಬಲಪಾರ್ಶ್ವದಲ್ಲಿದ್ದ. ಇಷ್ಟೆಲ್ಲ ಅವಾಂತರ ನಡೆದಾಗಲೂ ಅವನು ನಿಂತಲ್ಲೇ ನಿಂತಿದ್ದ. ಸುತ್ತಲಿನ ಜನ ಅವನನ್ನು ದೂಡಿಕೊಂಡೇ ಓಡಿ ಹೋದರೂ ಸ್ಥಿಮಿತ ತಪ್ಪಿದವನಂತೆ ನಿಂತು ಕೊಂಡಿದ್ದ. ಈಗ ಸುತ್ತ ಮೆಲ್ಲನೆ ನೋಡಿದ.

ತಾನೊಬ್ಬನೇ ಇಲ್ಲಿ ನಿಂತಿದ್ದೇನೆ. ತಟ್ಟನೆ ಭಯದ ಚಳಕು ಏರತೊಡಗಿತು. ಓಡಬೇಕು.... ಎಲ್ಲಾದರೂ ಓಡಿಬಿಡಬೇಕು ಅಡಗಬೇಕು. ಆನೆ ತಿರುಗಿ ಬಂದೀತು.

ಆನೆ ಬಂದೀತು... ಅದೋ ಬಂದಿತು. ಬಂತು ಆನೆ! ದೂರದಲ್ಲಿ ದಾಪುಗಾಲಿಡುತ್ತಾ ಬರುತ್ತಿದೆ. ಆಶ್ಚರ್ಯ ! ಸರ ಕದ್ದ ಕಳ್ಳ ಆನೆಯ ಸೊಂಡಿಲಲ್ಲಿ ಹಿಡಿ ಮುದ್ದೆಯಾಗಿದ್ದಾನೆ ಅದೋ ಅಪ್ಪಳಿಸಿತು. ಆತ ರಕ್ತ ಕಾರುತ್ತಾ ಬಿದ್ದ. ಆನೆ ಸೊಂಡಿಲೆತ್ತಿ ಭಯಂಕರವಾಗಿ ಘೀಳಿಡುತ್ತಾ ಬರುತ್ತಿದೆ. ಬಂದೇಬಿಟ್ಟಿತು. ಇನ್ನೇನು ಎತ್ತಿ ಅಪ್ಪಳಿಸಬೇಕು !

ಅವನ ಕಾಲ್ಗಳಿಗೆ ಶಕ್ತಿ ನುಗ್ಗಿ ಬಂದಿತು. ಜೋರಾಗಿ ಓಡತೊಡಗಿದ ಅತ್ತಿತ್ತ ನೋಡದೇ ಒಂದೇ ಉಸುರಿಗೆ ಓಡಿದ. ಅಭ್ಯಾಸ ಬಲದಿಂದ ಕಾಲು ರೂಮಿನ ಕಡೆಗೇ ನಡೆಯಿತು. ಅವನು ಓಡುವುದನ್ನು ಕಂಡು, ಧೈರ್ಯದಿಂದ ರಸ್ತೆಗಿಳಿದಿದ್ದ ಕೆಲವರೂ ಆ ಬಂತೆಂದು ಓಡತೊಡಗಿದರು. ಅವನು ಓಡುತ್ತಾ ರೂಮಿಗೆ ಬಂದ. ಬೀಗ ತೆಗೆದು ಒ ಹೋಗಿ ಲೈಟು ಸ್ವಿಚ್ಒತ್ತಿ ಕುರ್ಚಿಯ ಕುಸಿದ.

ಎದೆ ಢವಢವಿಸುತ್ತಿತ್ತು. ಮೈಯೆಲ್ಲ ಬೆ ತು ಒದ್ದೆಯಾಗಿತ್ತು. ಉಸಿರು ಹಿಡಿತಕ್ಕೆ ಬಂ ಮೇಲೆ ಬಕೆಟಿನಿಂದ ನೀರು ತೆಗೆದು ಹೊ ಹೋಗಿ ಮುಖ ತೊಳೆದ. ಸ್ವಲ್ಪ ತಂಪೆ ಸಿತು ಪುನಃ ಕುರ್ಚಿಯಲ್ಲಿ ಕುಸಿದ. ದೇಹ ದ ಕುದಿತ ಇನ್ನೂ ಶಾಂತವಾಗಿರಲಿಲ್ಲ. ಗಾ ಯಾಡಲೆಂದು ಕಿಟಕಿಯ ಬಾಗಿಲು ತೆರೆದ ಕಿಟಕಿಯ ಬಳಿಯಲ್ಲೇ ಇದ್ದ ಕನ್ನಡಿಯಲ್ಲಿ ಪ್ರತಿಬಿಂಬ ಅದರುತ್ತಿದ್ದಂತೆ ತೋರಿತು ಚ್ಚರಿಯೆನಿಸಿ ಕನ್ನಡಿಯನ್ನು ಕೈಯಲ್ಲಿ ಹಿ ದುಕೊಂಡ. ಕನ್ನಡಿಯ ಜೊತೆಗೆ ಅವನು ಹೊಯ್ದಾಡ ತೊಡಗಿದ.

ಆಗ ವಿಚಿತ್ರ ನಡೆಯಿತು.....

ಅವನ ಪ್ರತಿಬಿಂಬ ದೊಡ್ಡದಾಗಿ ಉದ್ದ ಕ್ಕೂ ಅಡ್ಡಕ್ಕೂ ಬೆಳೆಯುತ್ತಾ ಹೋಯಿತು ಮೂಗು ಸೊಂಡಿಲಿನಂತೆ ಉದ್ದವಾಗ ತ್ತ ಕಣ್ಣುಗಳು ಕಿರಿದಾಗಿ, ಕ್ರೂರವಾಗಿ ಹೊಳೆದು ಹಣೆ ಅಗಲವಾಯಿತು. ಸರ್ರ ದಾಡೆಗಳು ಮೊಳೆದವು.

ಆನೆ ಸೊಂಡಿಲೆತ್ತಿ ಅವನ ಎದೆ ಬಿರಿಯು ವಂತೆ ಘೀಳಿಟ್ಟಿತು.

ಫಳಾರ್........ !

ಅವನ ಸರ್ವಾಂಗವೂ ಗಡಗಡನೆ ನಡುಗುತ್ತಿತ್ತು. ಕನ್ನಡಿಯ ಚೂರುಗಳು ನೆಲದ ಮೇಲೆ ಹರಡಿದ್ದವು. ಸ್ವಲ್ಪ ಹೊತ್ತು ಅ ನು ಹಾಗೇ ನಿಂತಿದ್ದ. ನಂತರ ತಟ್ಟನೆ ಬಗ್ಗಿ ಬಗ್ಗಿ ಕನ್ನಡಿಯ ಚೂರುಗಳಲ್ಲಿ ಇಣುಕುತ್ತ ತನ್ನನ್ನು ಅರಸತೊಡಗಿದ.

(ಮೇ 1978

## ಹರಿಹರಪುರ ಮಠಾಧೀಶರ ೀಠಾರೋಹಣ ಸ್ವರ್ಣೋತ್ಸವ

ಹರಿಹರಪುರ: "ಜನರ ಸೇವೆಯೇ ನಾವು ವರಿಗೆ ಸಲ್ಲಿಸುವ ತೆರಿಗೆ. ಅದರಲ್ಲೂ ದೀನ ತರ ಸೇವೆ ನಮ್ಮ ಕರ್ತವ್ಯ. ಮಠಾಧಿ ಗಳಿಗೆ ಬೇಕಾದಷ್ಟು ವೈಭವ, ಗೌರವ ಗಬಹುದು. ಭೌತಿಕ ಆಧ್ಯಾತ್ಮಿಕ ಸಂಪ ನ ಅಧಿಕಾರಿಯಾಗಿ ಅವರಿಗೆ ತುಂಬಾ ಣೆಗಳಿವೆ. ಇಲ್ಲಿನ ಸ್ವಾಮೀಜಿಯವರು ಂಬ 50 ವರ್ಷಗಳ ಸಾರ್ಥಕ ಅಧಿಕಾರ ಡೆಸಿ ಹೆಚ್ಚಿನ ಜನೋಪಯೋಗಿ ಕಾರ್ಯ ಳನ್ನು ನಿರ್ವಹಿಸಿದ್ದಾರೆ. ಅವರ ಕಾರ್ಯ ಂ ಹೀಗೇ ತಮಗೆ ದೊರೆಯಲಿ" ಎಂದು ಜಾವರ ಮಠಾಧೀಶರು, ಹರಿಹರಪುರ ಠಾಧೀಶರ ಪೀಠಾರೋಹಣ ಸುವರ್ಣ ಹೋತ್ಸವದ ಸಂದರ್ಭದಲ್ಲಿ ತಿಳಿಸಿದರು.

ಗೌರವಾರ್ಪಣೆಗೆ ಉತ್ತರವಾಗಿ ಮಾತ ಡಿದ ಹರಿಹರಪುರ ಸ್ವಾಮಿಗಳು, "ಎಲ್ಲಾ ಜರು ಹೊಂದಿರುವ ಗೆಲುವು ಹೇಗೆ ಅವರ ನಿಕರ ಹೋರಾಟದಿಂದಲೇ ಬಂದದ್ದೋ, ಾಗೆಯೇ ನಾವು ಮಾಡಿರಬಹುದಾದ ಕಾ ರ್ಯಗಳು ನೆರವೇರಿದ್ದು ಮಠದ ಶಿಷ್ಯ ಬಲ ುತ್ತು ಸಾರ್ವಜನಿಕರ ಬೆಂಬಲದಿಂದ" ಎಂ ು ಕೃತಜ್ಞತೆ ಸಲ್ಲಿಸಿದರು.

ಕೆ.ವಿ. ರಾಮಪ್ಪಯ್ಯ ಸ್ವಾಗತಿಸಿ, ಬಿ. ುಬ್ರಮಣ್ಯಂ ವಂದಿಸಿದರು. ಅನೇಕ ಸಂ ಸಂಸ್ಥೆಗಳು ಮತ್ತು ಸಾರ್ವಜನಿಕರು ಬ್ಬರೂ ಗುರುಗಳಿಗೆ ಗೌರವ ಅರ್ಪಿಸಿದರು.

## ಂ|| ವರ್ಗಗಳ ಹಾಸ್ಟೆಲ್‌ಗೆ ಅರ್ಜಿ ಆಹ್ವಾನ

ಕೊಪ್ಪ: ಪರಿಶಿಷ್ಟ ಜಾತಿ ಮತ್ತು ಪರಿ ಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಂದುಳಿದ ಮತ್ತು ಅಲ್ಪ ಸಂಖ್ಯಾತರ ಇ ಲಾಖೆಯಿಂದ ನಡೆಸುತ್ತಿರುವ ಕೊಪ್ಪ ಸಾ ರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ, ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿನಿಲ ಯ. ಬಾಳಗಡಿ, ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ, ಕಮ್ಮರಡಿ ಹಾಗೂ ಕೊಪ್ಪ ಟೌನ್ ಮತ್ತು ಬಸರೀಕಟ್ಟೆಯಲ್ಲಿ ರುವ ಹಿಂದುಳಿದ ವರ್ಗ ಮತ್ತು ಅಲ್ಪಸಂ ಖ್ಯಾತರ ವಿದ್ಯಾರ್ಥಿನಿಲಯಗಳನ್ನು ಜೂನ್ ತಿಂಗಳಿನಿಂದ ಪ್ರಾರಂಭಿಸಲಾಗುವುದು.

ವಿದ್ಯಾರ್ಥಿನಿಲಯಗಳಿಗೆ ಮಕ್ಕಳನ್ನು ಸೇರಿಸಲಿಚ್ಛಿಸುವ ಪೋಷಕರು ಅರ್ಜಿಗಳನ್ನು ಕೊಪ್ಪದ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿಯಿಂದ ಕೂಡಲೇ ಪಡೆದು ಭರ್ತಿ ಮಾಡಿ ಮೇ 28 ರೊಳಗೆ ಸಲ್ಲಿಸಬೇಕು. ಹೆಚ್ಚಿನ ಮಾಹಿತಿಯನ್ನು ಕ್ಷೇತ್ರಾಭಿವೃದ್ಧಿ ಕಛೇರಿಯಲ್ಲಿ ಪಡೆಯಬಹುದು.

## 'ನಾಪತ್ತೆ'ಯಾಗಿದ್ದ ಯುವತಿಯರಲ್ಲಿ ಒಬ್ಬಾಕೆ ಪತ್ತೆ

ಕೊಪ್ಪ: ದಯಂಬಳ್ಳಿ ಗ್ರಾಮದಿಂದ ಕಳೆದ ವಾರ 'ನಾಪತ್ತೆ'ಯಾಗಿದ್ದಾಳೆಂದು ದೂರು ನೀಡಲಾಗಿದ್ದ ರತ್ನ ಎಂಬ ಹರಿಜನ ಯುವತಿ ಪತ್ತೆಯಾಗಿದ್ದು, ಮೇ 7 ರಂದು ಬಿಳಾಲ್‌ಕೊಪ್ಪದಲ್ಲಿ ನಡೆದ ಸಾಮೂಹಿಕ ವಿವಾಹ ಸಮಾರಂಭದಲ್ಲಿ ತನ್ನ ಪ್ರಿಯಕರ ಕೃಷ್ಣ ಎಂಬ ಯುವಕನೊಡನೆ ಮದುವೆಯಾಗಿದ್ದಾಳೆಂದು ತಿಳಿದು ಬಂದಿದೆ.

ವಾಸ್ತವವಾಗಿ ಆಕೆ ಬೊಂಬಾಯಿಗಾಗಲಿ ಮಂಗಳೂರಿಗಾಗಲಿ ಹೋಗಿರದೆ ತಾನು ಮೆಚ್ಚಿದ್ದ, ಗುಡ್ಡೇತೋಟ ಸಮೀಪದ ಜನತಾ ಕಾಲೊನಿ ವಾಸಿ ಕೃಷ್ಣನನ್ನು ಕೂಡಿಕೊಳ್ಳಲು ಹೋಗಿದ್ದಳೆಂದೂ, ಅನಂತರ ಅವರಿಬ್ಬರೂ ಬಿಳಾಲ್‌ಕೊಪ್ಪದಲ್ಲಿ ಮದುವೆಗೆ ಹೆಸರು ನೋಂದಾಯಿಸಿಕೊಂಡರೆಂದೂ ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ತಿಳಿಸಿದ್ದಾರೆ.

ಅವಳ ತಂದೆಯಿಂದ ಮತ್ತೊಂದು ದೂರನ್ನು ಪಡೆದು ಅವರು ತನಿಖೆ ಮುಂದುವರಿಸಿದಾಗ ಆಕೆ ಕೃಷ್ಣನ ಮನೆಯಲ್ಲಿದ್ದುದು ಗೊತ್ತಾಯಿತು. "ನನ್ನನ್ನು ಯಾರೂ ಎಲ್ಲಿಗೂ ಕರೆಯಲಿಲ್ಲ. ನಾನು ಮೆಚ್ಚಿದ್ದವನನ್ನು ಮದುವೆಯಾಗಲು ಈ ಗಲಿಬಿಲಿಯ ಅವಕಾಶವನ್ನು ಉಪಯೋಗಿಸಿಕೊಂಡು ಮನೆ ಬಿಟ್ಟು ಬಂದೆ" ಎಂದು ಆಕೆ ಹೇಳಿದ್ದಾಗಿ ದುರ್ಗಯ್ಯ ತಿಳಿಸಿದ್ದಾರೆ.

ಕಾಣೆಯಾಗಿರುವರೆನ್ನಲಾದ ಮತ್ತಿಬ್ಬರು ಯುವತಿಯರು ಸ್ವಲ್ಪ 'ಅದೇ ಚಾಳಿ' ಯವರೆಂದು ಸುತ್ತಮುತ್ತಲ ಜನ ಹೇಳಿದ್ದು, ಅವರು ಕೂಡ ಶೃಂಗೇರಿಯ ಸುತ್ತಮುತ್ತ ಹೀಗೇ ಎಲ್ಲೋ ಇರುವ ಸಾಧ್ಯತೆಯಿದೆಯೆಂದೂ, ತನಿಖೆ ಮುಂದುವರಿಸಿರುವುದಾಗಿಯೂ ಅವರು ಹೇಳಿದ್ದಾರೆ.

## ಬಡವರ ಬೆವರ ಹಣಕ್ಕೂ ಧೋಖಾ ?

(ಒಂದನೇ ಪುಟದಿಂದ)

ದಿನಕ್ಕೆ ನಾಲ್ಕಾಣೆಯೋ ಎಂಟಾಣೆಯೋ ಪಿಗ್ಮಿ ಕಟ್ಟುತ್ತಿದ್ದ ಹೋಟೆಲ್ ಮಾಣಿಯೊಬ್ಬ, ಸಂಸ್ಥೆ ಬಾಗಿಲು ಹಾಕಿದ್ದು ಕೇಳಿ, "ಅಯ್ಯೋ, ನನ್ನದೂ ನೂರೆಂಬತ್ತು ರೂಪಾಯಿ ಇತ್ತು. ಹೋಯ್ತಲ್ಲ ಸಾರ್!" ಎಂದು ಕೈಯಲ್ಲಿ ಮುಖ ಮುಚ್ಚಿ ರೋದಿಸಿದ್ದನ್ನು ನೋಡಿ ಸಂಕಟ ಪಟ್ಟವರಿದ್ದಾರೆ. ಇಂಥ ದುರಂತ ಕತೆಗಳು ಅದೆಷ್ಟೋ!

ಹೀಗೆ ಬಹುಶಃ ರಾಜ್ಯ ಅಥವಾ ರಾಷ್ಟ್ರ ಮಟ್ಟದಲ್ಲೇ (ಅಲ್ಲೆಲ್ಲಾ ಅದು ಇದ್ದಿದ್ದು ಹೌದಾದರೆ) ಮುಚ್ಚಿರಬಹುದಾದ ಈ ಸಂಸ್ಥೆ ತಾನು ಸ್ಥಳೀಯವಾಗಿ ನೇಮಿಸಿಕೊಂಡಿದ್ದ ಸಿಬ್ಬಂದಿಯನ್ನು ಠೇವಣಿದಾರರ ಕೋಪಕ್ಕೆ ಒಡ್ಡಿ ತಾನು ಗಂಟಿನೊಂದಿಗೆ ಜಾರಿಕೊಂಡಿದೆ ಎನ್ನಲಾಗುತ್ತಿದೆ. ಇದರಿಂದಾಗಿ, ಈ ಸಿಬ್ಬಂದಿಗಳ ಪೈಕಿ ಮರ್ಯಾದಸ್ಥರಾಗಿದ್ದವರು ತಮ್ಮ ಜನಗಳಿಗಾದ ಮೋಸಕ್ಕಾಗಿ ಮರುಗಿ, ನೋವು, ಅಪಮಾನಗಳಿಂದ ತಲೆ ಎತ್ತಲಾರದವರಾಗಿದ್ದರೆ, ಇಂಥ 'ಸದವಕಾಶ' ಗಳಿಂದಲೇ ಹೊಟ್ಟೆ ಹೊರೆಯುವ ಕೆಲ ಏಜೆಂಟರುಗಳು ಠೇವಣಿದಾರರೆದುರು 'ಮೊಸಳೆ ಕಣ್ಣೀರು' ಸುರಿಸುತ್ತ, ಈ ಹುಚ್ಚು ಮುಂಡೆ ಮದುವೆಯಲ್ಲಿ ಹೊಟ್ಟೆ ತುಂಬ ಉಂಡು ದಕ್ಕಿಸಿಕೊಂಡುದಕ್ಕಾಗಿ ನಿರ್ಲಜ್ಜೆಯಿಂದ ಬೀಗುತ್ತಿದ್ದಾರೆ.

## ವೇದ ಶಿಕ್ಷಾ ವರ್ಗದ ಸಮಾರೋಪ

ಹರಿಹರಪುರ: ಇಲ್ಲಿನ ಪ್ರಬೋಧಿನಿ ಟ್ರಸ್ಟ್ ಆಶ್ರಯದಲ್ಲಿ 20 ದಿನ ನಡೆದ ವೇದ ಶಿಕ್ಷಾ ವರ್ಗದ ಸಮಾರೋಪ ಮೇ 2ರಂದು ಕೆ. ವಿ. ರಾಮಪ್ಪಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಿಂಹನಗದ್ದೆ ಬಸ್ತಿಮಠದ ಲಕ್ಷ್ಮೀಸೇನ ಭಟ್ಟಾರಕ ಸ್ವಾಮಿಗಳು ಮತ್ತು ಹರಿಹರಪುರ ಮಠಾಧೀಶರು ಮುಖ್ಯ ಅತಿಥಿಗಳಾಗಿದ್ದರು. ಮೇ 1ರಂದು ಪೇಜಾವರ ಮಠಾಧೀಶರು ಶಿಬಿರಕ್ಕೆ ಭೇಟಿ ಕೊಟ್ಟು ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು.

## ನ್ಯಾಯಬೆಲೆ ಅಂಗಡಿಗೆ ಒತ್ತಾಯ

ಅಗಳಗಂಡಿ: ಇಲ್ಲಿ ನ್ಯಾಯಬೆಲೆ ಅಂಗಡಿಯೊಂದನ್ನು ಕೂಡಲೇ ತೆರೆಯಲು ಮಂಜೂರಾತಿ ನೀಡುವಂತೆ ಗ್ರಾಮಸ್ಥರು ತಹಸೀಲ್ದಾರರನ್ನು ಒತ್ತಾಯಿಸಿದ್ದಾರೆ.

ಮಂಡಲದ ವ್ಯಾಪ್ತಿಯ ಹುಲಿಗರಡಿ, ದಯಂಬಳ್ಳಿ ಗ್ರಾಮಗಳೂ ಸೇರಿದಂತೆ ಎಲ್ಲೂ ಒಂದು ನ್ಯಾಯಬೆಲೆ ಅಂಗಡಿ ಇಲ್ಲ. ಸದ್ಯಕ್ಕೆ ಜಯಪುರ ವ್ಯ ಸೇ. ಸಹಕಾರ ಸಂಘದವರು ವಾರಕ್ಕೆ ಒಂದೋ ಎರಡೋ ಬಾರಿ ಇಲ್ಲಿಗೆ ಬಂದು ಇದ್ದಷ್ಟು ವಸ್ತುಗಳನ್ನು ವಿತರಣೆ ಮಾಡುತ್ತಿದ್ದಾರೆ. ಆದರೆ ಅವರು ಬರುವ ದಿನ ನಿಗದಿತವಲ್ಲದ್ದರಿಂದ ಜನ ಅವರು ಬರುವುದನ್ನೇ ಕಾದು ಕೂತು ಪಡಿತರ ವಸ್ತುಗಳನ್ನು ಪಡೆಯಬೇಕಾಗುತ್ತಿದೆ. ಅದರಲ್ಲೂ ಸೀಮೆಎಣ್ಣೆಯಂತೂ ದೊರೆಯುತ್ತಲೇ ಇಲ್ಲ ಎಂದು ಜನತೆ ಮನವಿಗುಲ್ಲಿ ತಿಳಿಸಿದ್ದಾರೆ.

ಕೊಪ್ಪ ತಾ. ವ್ಯ. ಮಾ. ಸ ಸಂಘದವರು ಇಲ್ಲಿ ಒಂದು ಶಾಖೆಯನ್ನು ತೆರೆಯಲು ಕ್ರಮ ಕೈಗೊಂಡಿದ್ದಾರೆ. ಆದರೆ ಜಯಪುರ ವ್ಯ. ಸೇ ಸ. ಸಂಘದವರು ಈ ಬಗ್ಗೆ ಆಕ್ಷೇಪ ಎತ್ತಿದ್ದಾರೆಂದು ತಿಳಿದುಬಂದಿದೆ. ಆದ್ದರಿಂದ ಈ ಮಂಡಲ ವ್ಯಾಪ್ತಿಯಲ್ಲಿರುವ ದೂರ ದೂರದ ಹಳ್ಳಿಗಳವರಿಗೂ ಸುಲಭದಲ್ಲಿ ಪಡಿತರ ವಸ್ತುಗಳು ಸಿಗುವಂತೆ ಅಗಳಗಂಡಿಯಲ್ಲಿ ಕೊಪ್ಪ ಸೊಸೈಟಿಯ ಒಂದು ಶಾಖೆಯನ್ನಾಗಲಿ ಅಥವಾ ಒಂದು ನ್ಯಾಯಬೆಲೆ ಅಂಗಡಿಯನ್ನಾಗಲಿ ಆರಂಭಿಸಲು ಕೂಡಲೇ ಅನುಮತಿ ನೀಡಬೇಕೆಂದು ಮನವಿಯಲ್ಲಿ ಒತ್ತಾಯಿಸಲಾಗಿದೆ.

## ಶೃಂಗೇರಿ ಕ್ಷೇತ್ರದ ಮಂಡಲಗಳಲ್ಲಿ ಜನತಾ – ಕಾಂಗ್ರೆ ಬಲಾಬಲ

| ತಾಲ್ಲೂಕು | ಪ್ರಧಾನರು | | | ಉಪ ಪ್ರಧಾನರು | | |
|---|---|---|---|---|---|---|
| | ಜನತಾ | ಕಾಂಗ್ರೆ | ಪಕ್ಷೇತರ | ಜನತಾ | ಕಾಂಗ್ರೆ | ಪಕ್ಷೇತರ |
| ಶೃಂಗೇರಿ | 3 | 1 | – | 3 | 1 | – |
| ಕೊಪ್ಪ | 7 | 4 | – | 7 | 4 | – |
| ನ.ರಾ. ಪುರ | 6 | – | 1 | 5 | – | 2 |
| ಜಿಲ್ಲೆಯಲ್ಲಿ ಒಟ್ಟು | 68 | 21 | 8 | 65 | 19 | 13 |

ಕಡೂರು, ತರೀಕೆರೆ ತಾ||ಗಳ 2 ಮಂಡಲಗಳಲ್ಲಿ ಚುನಾವಣೆಗೆ ಹೈಕೋರ್ಟ್ ತಡೆಯಾಜ್ಞೆ ನೀಡಿದೆ. ಮರ್ಲೆ ಮಂಡಲ ಚುನಾವಣೆ ಮುಂದೂಡಲಾಗಿದೆ.

(ಅಂಕಿ-ಅಂಶ: ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿಗಳಿಂದ)

## ಅಂಚೆ ನೌಕರರ ಸಮ್ಮೇಳನ

ಕೊಪ್ಪ: ಇಲ್ಲಿನ ಮುಖ್ಯ ಅಂಚೆ ಕಚೇರಿ ವ್ಯಾಪ್ತಿಯ ಎಲ್ಲಾ ಅಂಚೆ ಕಛೇರಿಗಳ 3ನೇ ಮತ್ತು 4ನೇ ದರ್ಜೆ ನೌಕರರ ಕೊಪ್ಪ ಶಾಖಾ ಸಂಘದ (ಎನ್.ಎಫ್.ಪಿ.ಇ.) ಜಂಟಿ ವಾರ್ಷಿಕ ಅಧಿವೇಶನ ಮೇ 3ರಂದು ನಡೆಯಿತು. ರಾಜ್ಯ ಮತ್ತು ಜಿಲ್ಲಾ ಸಂಘದ ವಿವಿಧ ನಾಯಕರು ಭಾಗವಹಿಸಿ ಮಾರ್ಗದರ್ಶನ ನೀಡಿದರು. ಜಿ.ಪ. ಸದಸ್ಯ ಬಿ.ಜಿ. ಚಿದಂಬರ್ ಮುಖ್ಯ ಅತಿಥಿಯಾಗಿದ್ದರು.

## ಶಿವಮೊಗ್ಗ ಅಡಿಕೆ ಧಾರಣೆ

ತಾ|| 6.5.1987

ಸರಕು : 3535 – 4200

ಬೆಟ್ಟೆ : 2005 – 2555

ಗೊರಬಲು : 751–1089

ಸಾಗರ ಅಡಿಕೆ ತಾ|| 6.5.87

ಇಡಿ ಅಡಿಕೆ ರೂ. 1769–1942

ಆಪಿ ರೂ. 3616–3900

ಚಾಲಿ ರೂ. 1188–1339

ಸಿಪ್ಪೆ ಗೋಟು ರೂ. 429–649





ಚಂದಾ ಹಣ ಕಳಿಸಿ ಸಹಕರಿಸಿ

ವಾರ್ಷಿಕ ಚಂದಾ 25 ರೂ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.